

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಆಗಸ್ಟ್ ೨೩, ೨೦೧೨ (ಭಾದ್ರಪದ ೧, ಶಕ ವರ್ಷ ೧೯೩೪) | ಸಂಚಿಕೆ ೩೪ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಅಧ್ಯಕ್ಷರು, ಗ್ರಾಮಲೆಕ್ಕಿಗರ ನೇಮಕಾತಿ ಮತ್ತು ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ ರವರ ಕಾರ್ಯಾಲಯ,**

**ಸಂಖ್ಯೆ: ಸಿಬ್ಬಂದಿ(1)ಸಿಆರ್.57/2012-13 ದಿನಾಂಕ: 13/08/2012**

**ಅಧಿಸೂಚನೆ**

**ವಿಷಯ :** ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ಹೊಸದಾಗಿ ಸ್ಥಾಪಿಸಲಾಗುವ ನಾಡಕಛೇರಿಗಳಲ್ಲಿ ಕರ್ತವ್ಯ ನಿರ್ವಹಿಸಲು ಹಾಗೂ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂಖ್ಯೆ: ಕಂ.ಇ.33.ಡಿಎಸ್‌ಸಿ.2012, ಬೆಂಗಳೂರು ದಿನಾಂಕ: 05/06/2012.

ಚಿಕ್ಕಬಳ್ಳಾಪುರ ಜಿಲ್ಲೆಯ ಕಂದಾಯ ಘಟಕದಲ್ಲಿ ಖಾಲಿ ಇರುವ ಹಾಗೂ ಹೊಸದಾಗಿ ಸ್ಥಾಪಿಸಲಾಗಿರುವ ನಾಡಕಛೇರಿಗಳಲ್ಲಿ ಸೃಜಿಸಲಾಗಿರುವ ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ತುಂಬಲು ಅರ್ಜಿಗಳನ್ನು ಅಹ್ವಾನಿಸಲಾಗಿದೆ. ಅರ್ಹ ಅಭ್ಯರ್ಥಿಗಳು ಅರ್ಜಿಗಳನ್ನು ಆನ್‌ಲೈನ್‌ನಲ್ಲಿ ಭರ್ತಿ ಮಾಡಿ, ದಿನಾಂಕ: 03/09/2012 ರ ಸಂಜೆ 5-30 ಗಂಟೆಯ ಒಳಗಾಗಿ ಸಲ್ಲಿಸಬಹುದಾಗಿರುತ್ತದೆ. ಹುದ್ದೆಗಳ ಸಂಖ್ಯೆ ವೇತನಶ್ರೇಣಿ, ಅರ್ಜಿ ಶುಲ್ಕ, ಮೀಸಲಾತಿ ವಿವರಗಳು ಇತ್ಯಾಧಿ ಎಲ್ಲಾ ಷರತ್ತುಗಳನ್ನು ಪ್ರತ್ಯೇಕವಾಗಿ ಅನುಬಂಧದಲ್ಲಿ ವಿವರಿಸಲಾಗಿದೆ.

ಅಧ್ಯಕ್ಷರು
ಗ್ರಾಮಲೆಕ್ಕಿಗರ ನೇಮಕಾತಿ ಮತ್ತು ಆಯ್ಕೆ ಪ್ರಾಧಿಕಾರ
ಹಾಗೂ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ.

**ಅಧಿಸೂಚನೆ ಸಂಖ್ಯೆ: ಸಿಬ್ಬಂದಿ(1)ಸಿಆರ್.57/2012-13 ಕ್ಕೆ ಅನುಬಂಧ**

ಚಿಕ್ಕಬಳ್ಳಾಪುರ ಜಿಲ್ಲೆ, ಕಂದಾಯ ಘಟಕದಲ್ಲಿ ಖಾಲಿ ಇರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಕಂ.ಇ.33.ಡಿಎಸ್‌ಪಿ.2012, ದಿನಾಂಕ: 05/06/2012 ರಂತೆ ಹೊಸದಾಗಿ ನಾಡ ಕಛೇರಿಗಳ ಸ್ಥಾಪನೆ ಮಾಡಿ, ಸೃಜಿಸಲಾಗಿರುವ ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗಳನ್ನು ವರ್ಗೀಕರಣ ಮತ್ತು ಮೀಸಲಾತಿ ಅನ್ವಯ ಕರ್ನಾಟಕ ನಾಗರೀಕ ಸೇವೆಗಳು (Revenue Sub-ordinate Branch) (Cadre and Recruitment) (Amendment) ನಿಯಮಗಳು-2008 ರ ನಿಯಮ-2 ರನ್ವಯ ಮತ್ತು 2009 ರನ್ವಯ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಸರ್ಕಾರದ ಪತ್ರ ಸಂಖ್ಯೆ: ಕಂ.ಇ.4.ಬಿ.ಎಸ್.ಪಿ.2011, ದಿನಾಂಕ: 25/02/2011 ಮತ್ತು ಅರೆ ಸರ್ಕಾರಿ ಪತ್ರ ಸಂಖ್ಯೆ: ಆರ್.ಡಿ.33.ಡಿಎಸ್‌ಪಿ.2012, ದಿನಾಂಕ: 21/06/2012 ರ ನಿರ್ದೇಶನದಂತೆ, ಖಾಲಿ ಇರುವ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅರ್ಜಿಗಳನ್ನು ಆನ್‌ಲೈನ್‌ನಲ್ಲಿ ಆಹ್ವಾನಿಸಲಾಗಿದೆ.

**1. ಹುದ್ದೆಗಳ ಸಂಖ್ಯಾ ವಿವರ ಮತ್ತು ವಿದ್ಯಾರ್ಹತೆ :**

| ಹುದ್ದೆಯ ಹೆಸರು | ಒಟ್ಟು ಹುದ್ದೆ | ವಿದ್ಯಾರ್ಹತೆ |
|---|---|---|
| ಗ್ರಾಮಲೆಕ್ಕಾಧಿಕಾರಿ | 56 | ಪಿ.ಯು.ಸಿ. ಅಥವಾ (ಸಿಬಿಎಸ್ಇ/ ಐಸಿಎಸ್ಇ) 12ನೇ ತರಗತಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಹಾಗೂ ಕನ್ನಡ ಮತ್ತು ಆಂಗ್ಲ ಭಾಷೆಯ ಗಣಕಯಂತ್ರ ನಿರ್ವಹಣೆ (MS Office) ಬಗ್ಗೆ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಮುಂಚಿತವಾಗಿ ಹೊಂದಿರಬೇಕು |

**2. ವೇತನ ಶ್ರೇಣಿ :** ರೂ. 11600–200–12000–250–13000–300–14200–350–15600–400–17200–450–19000–500–21000

**3. ಮೀಸಲಾತಿ ವರ್ಗೀಕರಣ :**

ಒಟ್ಟು 56 ಹುದ್ದೆಗಳು 34ನೇ ರೋಷ್ಟರ್ ಬಿಂದುವಿನಿಂದ 86 ರವರೆಗೆ

| ಕ್ರ. ಸಂ. | ಮೀಸಲಾತಿ | ಸಾಮಾನ್ಯ | ಮಹಿಳೆ | ಗ್ರಾಮೀಣ | ಅಂಗವಿಕಲ | ಮಾಜಿಸೈನಿಕ | ಕನ್ನಡ ಮಾಧ್ಯಮ | ಯೋಜನಾ ನಿರಾಶ್ರಿತರು | ಒಟ್ಟು |
|---|---|---|---|---|---|---|---|---|---|
| 1 | ಪರಿಶಿಷ್ಟ ಜಾತಿ | 2 | 2 | 3 | – | 1 | – | – | 8 |
| 2 | ಪರಿಶಿಷ್ಟ ಪಂಗಡ | – | 1 | 1 | – | – | – | – | 2 |
| 3 | ಪ್ರವರ್ಗ–1 | – | 1 | 1 | – | – | – | – | 2 |
| 4 | ಪ್ರವರ್ಗ–2(ಎ) | 2 | 2 | 3 | – | 1 | – | – | 8 |
| 5 | ಪ್ರವರ್ಗ–2(ಬಿ) | – | 1 | 1 | 1 | – | – | – | 3 |
| 6 | ಪ್ರವರ್ಗ–3(ಎ) | – | 1 | 1 | | – | – | – | 2 |
| 7 | ಪ್ರವರ್ಗ–3(ಬಿ) | – | 1 | 1 | 1 | – | – | – | 3 |
| 8 | ಸಾಮಾನ್ಯ | 6 | 8 | 6 | 2 | 3 | 1 | 2 | 28 |
| | ಒಟ್ಟು | 10 | 17 | 17 | 4 | 5 | 1 | 2 | 56 |

**4.** ಅರ್ಹ ಅಭ್ಯರ್ಥಿಗಳು ಆನ್‌ಲೈನ್ (online) ಮೂಲಕ ಮಾತ್ರವೇ ಅರ್ಜಿಯನ್ನು ಸಲ್ಲಿಸಬೇಕಾಗಿರುತ್ತದೆ. ಅರ್ಜಿಯನ್ನು ಜಿಲ್ಲಾಧಿಕಾರಿಗಳ ಕಛೇರಿಯಿಂದ ಒದಗಿಸಲಾಗುವುದಿಲ್ಲ ಹಾಗೂ ಯಾವುದೇ ಕಾರಣಕ್ಕೂ ಸಹ ನೋಂದಾಯಿತ/ಸಾಮಾನ್ಯ ಅಂಚೆ, ಕೊರಿಯರ್ ಅಥವಾ ಇಮೇಲ್ ಮೂಲಕ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಅಭ್ಯರ್ಥಿಯು ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ರವರ ಅಧಿಕೃತ ವೆಬ್ ಸೈಟ್ http://cbpur-va.kar.nic.in ನ ಆನ್‌ಲೈನ್ ಮುಖಾಂತರ ಗ್ರಾಮಲೆಕ್ಕಿಗರ ನೇರನೇಮಕಾತಿ ಅರ್ಜಿ ತುಂಬುವುದು ರ ಮೇಲೆ ಕ್ಲಿಕ್ ಮಾಡಿದಾಗ ತೆರೆದ ಕಂಪ್ಯೂಟರ್ ಪರದೆಯ ಮೇಲೆ ಅರ್ಜಿಯನ್ನು ತುಂಬಬೇಕು. ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯರ್ಥಿಯು submit button ನ್ನು ಒತ್ತಿದರೆ ಅರ್ಜಿ ಸಂಖ್ಯೆ: (reference number) ಸೃಷ್ಟಿಯಾಗುತ್ತದೆ. ಆನ್‌ಲೈನ್ ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯರ್ಥಿಗಳು ಸ್ವೀಕೃತಿ ಪತ್ರ (Acknowledgement Slip) ಮತ್ತು ಚಲನ್‌ನ ದ್ವಿಪ್ರತಿಗಳನ್ನು ತೆಗೆದುಕೊಳ್ಳತಕ್ಕದ್ದು. ಈ ಚಲನ್‌ನ್ನು ಅರ್ಜಿ ಶುಲ್ಕದೊಂದಿಗೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್‌ನ ಯಾವುದೇ ಶಾಖೆಯಲ್ಲಿ ಪಾವತಿಸಬಹುದು. ಪಾವತಿಸುವಾಗ ಚಲನ್‌ನಲ್ಲಿ ಅರ್ಜಿಯ ಸಂಖ್ಯೆ (reference number) ಮತ್ತು ಅಭ್ಯರ್ಥಿಯ ಹೆಸರು ಸರಿಯಾಗಿ ನಮೂದಾಗಿದೆಯೇ ಎಂದು ಅಭ್ಯರ್ಥಿಯು ಪರಿಶೀಲಿಸುವುದು. ಅಭ್ಯರ್ಥಿಗಳು ಸ್ವೀಕೃತಿ ಪತ್ರವನ್ನು ಮತ್ತು ಚಲನ್‌ಪಾವತಿಯ ಒಂದು ಪ್ರತಿಯನ್ನು ಕಡ್ಡಾಯವಾಗಿ ತಮ್ಮ ಬಳಿ ಇರಿಸಿಕೊಳ್ಳತಕ್ಕದ್ದು. ಅರ್ಜಿ ಶುಲ್ಕದ ಜೊತೆಗೆ ಬ್ಯಾಂಕ್ ಸರ್ವೀಸ್ ಚಾರ್ಜ್‌ನ್ನು ಸಹಾ ಅಭ್ಯರ್ಥಿಗಳು ಬ್ಯಾಂಕ್‌ಗೆ ಪಾವತಿಸತಕ್ಕದ್ದು. ಈ ದಾಖಲೆಗಳನ್ನು ಅಭ್ಯರ್ಥಿಗಳ ಮೂಲ ದಾಖಲೆಗಳ ಪರಿಶೀಲನೆಗೆ ನಿಗಧಿಪಡಿಸಿದ ದಿನಾಂಕದಂದು ಹಾಜರುಪಡಿಸತಕ್ಕದ್ದು.

**ಅರ್ಜಿ ಶುಲ್ಕದ ವಿವರ :** ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ, ಪ್ರವರ್ಗ–1 ಹಾಗೂ ಮಹಿಳಾ ಅಭ್ಯರ್ಥಿಗಳಿಗೆ ರೂ. 100/– ಹಾಗೂ ಇತರರಿಗೆ ರೂ. 200/– ಗಳನ್ನು ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ರವರ State Bank of Mysore, Chickballapur ಶಾಖೆಯಲ್ಲಿನ ಉಳಿತಾಯ

ಖಾತೆ ಸಂಖ್ಯೆ: 64030323576 ಗೆ ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕಕ್ಕೆ ಮುಂಚೆ ಪಾವತಿ ಮಾಡಿ ಚಲನ್ ಸಂಖ್ಯೆಯನ್ನು ಅರ್ಜಿಯಲ್ಲಿ ದಿನಾಂಕದ ಸಹಿತ ತಪ್ಪದೆ ನಮೂದಿಸುವುದು. ನಿಗಧಿತ ಶುಲ್ಕ ಪಾವತಿಸದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**ಅನ್‌ಲೈನ್ ಮೂಲಕ ಶುಲ್ಕದೊಂದಿಗೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 03/09/2012 ಆಗಿರುತ್ತದೆ.**

5. **ವಯೋಮಿತಿ :** ಅರ್ಜಿಗಳನ್ನು ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಟ 18 ವರ್ಷ ವಯಸ್ಸು ಪೂರೈಸಿರತಕ್ಕದ್ದು. ಗರಿಷ್ಟ ವಯೋಮಿತಿ ಈ ಕೆಳಕಂಡಂತಿರತಕ್ಕದ್ದು.

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| 2ಎ, 2ಬಿ, 3ಎ, 3ಬಿ | 38 ವರ್ಷ |
| ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ/ ಪ್ರವರ್ಗ–1 | 40 ವರ್ಷ |
| ವಿಧವೆಯರು/ಅಂಗವಿಕಲ | ಚಾಲ್ತಿಯಲ್ಲಿ ನಿಗಧಿಪಡಿಸಿರುವ ವಯೋಮಿತಿಗೆ 10 ವರ್ಷ ಹೆಚ್ಚಿಗೆ ಸೇರಿಸಿಕೊಳ್ಳಲಾಗುವುದು |
| ಮಾಜಿ ಸೈನಿಕರು | ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವವರೋ ಅದಕ್ಕೆ 3 ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷ |

ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ವಿದ್ಯಾರ್ಹತೆಯ ಪ್ರಮಾಣ ಪತ್ರದಲ್ಲಿ ನಮೂದಿಸಿರುವಂತೆ ಜನ್ಮ ದಿನಾಂಕವನ್ನು ಪರಿಗಣಿಸಲಾಗುವುದು. ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) 1977 ರ ನಿಯಮಾವಳಿಗಳ ನಿಯಮ 6 ರಂತೆ ಗರಿಷ್ಟ ವಯೋಮಿತಿಯನ್ನು ಈ ಮುಂದಿನ ಪ್ರಕರಣಗಳಲ್ಲಿ ಮುಂದೆ ಹೇಳಿರುವಷ್ಟರ ಮಟ್ಟಿಗೆ ಹೆಚ್ಚಿಸಲು ಅವಕಾಶವಿದೆ.

ಎ) ಸರ್ಕಾರ ಅಥವಾ ಸ್ಥಳೀಯ ಪ್ರಾಧಿಕಾರ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪಿಸಲಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಅಡಿಯಲ್ಲಿ ಸರ್ಕಾರದಿಂದ ಸ್ಥಾಪಿತವಾಗಿದ್ದು ಮತ್ತು ಸರ್ಕಾರವು ಒಡೆತನ ಹೊಂದಿರುವ ಅಥವಾ ನಿಯಂತ್ರಣ ಹೊಂದಿರುವ ನಿಗಮದ ಅಡಿಯಲ್ಲಿ ಹುದ್ದೆಯನ್ನು ಧಾರಣ ಮಾಡಿರುವ ಅಥವಾ ಧಾರಣ ಮಾಡಿದ ಅಭ್ಯರ್ಥಿಯ ಸಂದರ್ಭದಲ್ಲಿ ಆತ ಅಂಥ ಹುದ್ದೆಯನ್ನು ಧಾರಣೆ ಮಾಡಿರುವಷ್ಟು ಅಥವಾ ಧಾರಣೆ ಮಾಡಿದಷ್ಟು ಅಥವಾ (ಹತ್ತು) ವರ್ಷಗಳು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

ಬಿ) ಅಂಗವಿಕಲನಾಗಿರುವ ಅಭ್ಯರ್ಥಿಯ ಸಂದರ್ಭದಲ್ಲಿ ಹತ್ತು ವರ್ಷಗಳು.

ಸಿ) ಈ ರಾಜ್ಯದಲ್ಲಿರುವ ಭಾರತ ಸರ್ಕಾರ ಜನಗಣತಿ ಸಂಸ್ಥೆಯಲ್ಲಿ ಹುದ್ದೆಯನ್ನು ಧಾರಣೆ ಮಾಡಿರುವ ಅಥವಾ ಧಾರಣ ಮಾಡಿದ್ದ ಅಭ್ಯರ್ಥಿಯ ಸಂದರ್ಭದಲ್ಲಿ ಅಂಥ ಹುದ್ದೆಯನ್ನು ಆತನು ಧಾರಣೆ ಮಾಡಿರುವಷ್ಟು ಅಥವಾ ಧಾರಣೆ ಮಾಡಿದಷ್ಟು ವರ್ಷಗಳು ಅಥವಾ ಐದು ವರ್ಷಗಳು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

ಡಿ) ಅಭ್ಯರ್ಥಿ ವಿಧವೆಯಾಗಿರುವ ಸಂದರ್ಭದಲ್ಲಿ ಹತ್ತು ವರ್ಷಗಳು.

ಇ) ಜೀತ ಕಾರ್ಮಿಕವಾಗಿದ್ದ ಅಭ್ಯರ್ಥಿಯ ಸಂದರ್ಭದಲ್ಲಿ ಹತ್ತು ವರ್ಷಗಳು.

ಎಫ್) **ಮಾಜಿ ಸೈನಿಕರು** ಃ ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವರು ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವರೊ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

ಅ) ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧನಾಗಿಲ್ಲದೆ) ಸೇವೆ ಸಲ್ಲಿಸಿದ ವ್ಯಕ್ತಿ ಎಂದು ಅರ್ಥ. ಅಂದರೆ ಡಿಫೆನ್ಸ್, ಸೆಕ್ಯೂರಿಟಿಕೋರ್, ಜನರಲ್ ರಿಸರ್ವ್ ಇಂಜಿನೀಯರಿಂಗ್ ಫೋರ್ಸ್, ಲೋಕ ಸಹಾಯಕ ಸೇನಾ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ.

ಮತ್ತು (ಬಿ) ಕೇಂದ್ರ ಸಶಸ್ತ್ರ ದಳಗಳಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಲಿಕೆಯನ್ನು ನೀಡಲಾಗುವುದಿಲ್ಲ.

ಆ) ಅಂತಹ ಸೇನೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ ಅಥವಾ

ಇ) ಸೈನಿಕ ಸೇವೆಯಿಂದ ಉಂಟಾದ ವೈದ್ಯಕೀಯ ಕಾರಣಗಳು ಅಥವಾ ಆತನ ನಿಯಂತ್ರಣ ಮೀರಿದ ಪರಿಸ್ಥಿತಿಗಳ ಮೇಲೆ ಅಂಥ ಸೇವೆಯಿಂದ ಬಿಡುಗಡೆ ಮಾಡಿರುವ ಮತ್ತು ವೈದ್ಯಕೀಯ ಅಥವಾ ಇತರ ಅಸಮರ್ಥತಾ ನಿವೃತ್ತಿ ವೇತನವನ್ನು ನೀಡಲಾಗಿರುವ ವ್ಯಕ್ತಿಯನ್ನು ಅಥವಾ

ಈ) ಆತನ ವೈಯಕ್ತಿಕ ಕೋರಿಕೆಯ ಮೇಲಲ್ಲದೆ ಸಿಬ್ಬಂದಿ ಸಂಖ್ಯೆ ಕಡಿತದ ಪ್ರತಿಫಲವಾಗಿ ಅಂಥ ಸೇವೆಯಿಂದ ಆತನನ್ನು ಬಿಡುಗಡೆಗೊಳಿಸಿರುವ ವ್ಯಕ್ತಿಯನ್ನು ಅಥವಾ

ಉ) ಆತನ ವೈಯಕ್ತಿಕ ಕೋರಿಕೆ ಮೇಲಲ್ಲದೆ ಅಥವಾ ದುರ್ವರ್ತನೆ ಅಥವಾ ಅದಕ್ಷತೆಯ ಕಾರಣದಿಂದಾಗಿ ವಜಾಗೊಳಿಸುವ ಅಥವಾ ತೆಗೆದುಹಾಕುವ ಮೂಲಕವಲ್ಲದೆ, ಅನ್ಯತಾ ನಿಯೋಜಿಸಲಾದ ನಿರ್ದಿಷ್ಟ ಅವಧಿ ಮುಕ್ತಾಯವಾದ ತರುವಾಯ ಅಂಥ ಸೇವೆಯಿಂದ ಬಿಡುಗಡೆಗೊಳಿಸಿರುವ ಮತ್ತು ಉಪದಾನ ನೀಡಿರುವ ವ್ಯಕ್ತಿಯನ್ನು ಮತ್ತು ಗ್ರಾಚುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾದೇಶಿಕ ಸೇನೆಯ ಮುಂದಿನ ಪ್ರವರ್ಗಗಳ ಸಿಬ್ಬಂದಿ ಎಂದರೆ.

1. ನಿರಂತರ ಸಂಚಿತೆ ಸೇವೆ ಸಂಬಂಧಿಸಿದ ನಿವೃತ್ತಿ ವೇತನದಾರ
2. ಸೈನಿಕ ಸೇವೆಯ ಕಾರಣದಿಂದ ಅಂಗವಿಕಲರಾದ ವ್ಯಕ್ತಿಗಳನ್ನು ಮತ್ತು
3. ಶೌರ್ಯ ಪ್ರಶಸ್ತಿ ವಿಜೇತರು – ಒಳಗೊಳ್ಳುತ್ತದೆ.

**ಜಿ) ಸರ್ಕಾರಿ ನೌಕರ :**

ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೂ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

**ಹೆಚ್) ಅಂಗವಿಕಲ ಅಭ್ಯರ್ಥಿಗಳು :**

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು–1977 ರ ನಿಯಮ 9(1–ಎ) ರ ಅನ್ವಯ ರಾಜ್ಯ ಸಿವಿಲ್ ಸೇವೆಯಲ್ಲಿನ ಗ್ರೂಪ್–ಸಿ ಹುದ್ದೆಗಳ ನೇರ ನೇಮಕಾತಿಯಲ್ಲಿ ಅಂಗವಿಕಲರಿಗೆ ಶೇ. 5 ರಷ್ಟು ಸಮತಳ ಮೀಸಲಾತಿ ಕಲ್ಪಿಸಲಾಗಿದೆ. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್.52.ಎಸ್ಆರ್ಆರ್.59, ದಿನಾಂಕ: 29/11/2002 ರಂತೆ ಮೀಸಲಾತಿ ನೀಡಲಾಗುವುದು. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಎ.115.ಸೆನೆನಿ.2005, ದಿನಾಂಕ: 19/11/2005 ರಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಸಂಬಂಧಪಟ್ಟ ಜಿಲ್ಲಾಮಟ್ಟದ ವೈದ್ಯಕೀಯ ಮಂಡಳಿಯು ನೀಡುವ ಮೂಲ ಪ್ರಮಾಣ ಪತ್ರವನ್ನು ಹಾಗೂ ದೃಢೀಕೃತ ಪ್ರತಿಯನ್ನು ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ಸಲ್ಲಿಸಬೇಕು. ಬೇರೆ ಯಾವುದೇ ನಮೂನೆಗಳಲ್ಲಿ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್.52.ಎಸ್ಆರ್ಆರ್.99, ದಿನಾಂಕ: 29/11/2002 ಮತ್ತು ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್.54.ಎಸ್ಆರ್ಆರ್.2012, ದಿನಾಂಕ: 23/06/2012 ರ ರೀತ್ಯಾ ಗ್ರಾಮಲೆಕ್ಕಿಗರ ಹುದ್ದೆಗಳಲ್ಲಿ ಅಂಗವಿಕಲರ ಮೀಸಲಾತಿಯನ್ನು ಈ ಕೆಳಕಂಡ ವರ್ಗಗಳಿಗೆ ಮಾತ್ರ ಕಲ್ಪಿಸಲಾಗಿದೆ.

1. ಕುಷ್ಟ ರೋಗದಿಂದ ಗುಣಮುಖರಾದವರು (Leprosy Cured)
2. ಶ್ರವಣ ದೋಷವುಳ್ಳವರು (Hearing impaired)
3. ದೈಹಿಕ ಅಂಗವಿಕಲರು (Locomotor disability)
4. ಮಾನಸಿಕ ಅಸ್ವಸ್ಥತೆ (Mentally ill)

ಈ ಮೇಲಿನ ಅಂಗವಿಕಲರು ಹೊರತುಪಡಿಸಿ ಇತರೆ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಗ್ರಾಮಲೆಕ್ಕಿಗರ ಹುದ್ದೆಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ ಹಾಗೂ ಈ ವರ್ಗದ ಅಂಗವಿಕಲ ಅಭ್ಯರ್ಥಿಗಳು ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುವ ಕನಿಷ್ಟ ಸಾಮರ್ಥ್ಯ ಹೊಂದಿರಬೇಕಾಗಿರುತ್ತದೆ.

**6. ಜಾತಿ/ಮೀಸಲಾತಿ ಪ್ರಮಾಣ ಪತ್ರಗಳು:**

ಜಾತಿ ಮೀಸಲಾತಿ ಕೋರಬಯಸುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಅಭ್ಯರ್ಥಿಗಳು ನಮೂನೆ–ಡಿ ರಲ್ಲಿ, ಪ್ರವರ್ಗ–1, ಅಭ್ಯರ್ಥಿಗಳು ನಮೂನೆ–ಇ ನಲ್ಲಿ ಹಾಗೂ 2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳು ನಮೂನೆ–ಎಫ್ ನಲ್ಲಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಈ ಪ್ರಮಾಣ ಪತ್ರವು ಈ ಹುದ್ದೆಗೆ ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು/ ಚಾಲ್ತಿಯಲ್ಲಿರಬೇಕು, ನಂತರ ಪಡೆದ ಪ್ರಮಾಣ ಪತ್ರಗಳನ್ನು ಪರಿಗಣಿಸುವುದಿಲ್ಲ.

**7. ಯೋಜನೆ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು :**

ಯೋಜನೆಗಳಿಂದ ನಿರ್ವಸಿತರಾದ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್ ರವರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್.23.ಎಸ್‌ಆರ್‌ಆರ್.99, ದಿನಾಂಕ: 23/11/2000 ರನ್ವಯ ಈ ಮೀಸಲಾತಿಯಡಿಯಲ್ಲಿ ಕ್ಲೈಮು ಮಾಡುವ ಅಭ್ಯರ್ಥಿಗಳು ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ.44.ಸೆಸೇನಿ.2001, ದಿನಾಂಕ: 27/07/2001 ರಲ್ಲಿ ತಿಳಿಸಿರುವಂತೆ ನಿಗದಿತ ನಮೂನೆಯಲ್ಲಿ ಸಲ್ಲಿಸತಕ್ಕದ್ದು.

**8. ಮಾಜಿ ಸೈನಿಕರ ಕುಟುಂಬದ ಅಭ್ಯರ್ಥಿಗಳು :**

ಮಾಜಿ ಸೈನಿಕರು ಎನ್ನುವ ಬಗ್ಗೆ ಅಥವಾ ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುತ್ತಿರುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರು ಎಂಬ ಬಗ್ಗೆ ಸಕ್ಷಮ ಮಿಲಿಟರಿ ಅಧಿಕಾರಿಗಳಿಂದ/ಸಕ್ಷಮ ಪ್ರಾಧಿಕಾರದಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

**9. ಗ್ರಾಮೀಣ ಅಭ್ಯರ್ಥಿಗಳು :**

ಗ್ರಾಮೀಣ ಅಭ್ಯರ್ಥಿ ಎಂದರೆ ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ., ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10ನೇ ತರಗತಿವರೆಗೆ ಗ್ರಾಮಾಂತರ ಪ್ರದೇಶದಲ್ಲಿ ವ್ಯಾಸಂಗ ಮಾಡಿದ ಬಗ್ಗೆ ವ್ಯಾಸಂಗದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರಿಯಿಂದ ಪಡೆದು ಲಗತ್ತಿಸತಕ್ಕದ್ದು. ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೈಮು ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ–2 ರಲ್ಲಿ ಪ್ರಮಾಣ ಪತ್ರವಲ್ಲದೆ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದು ಅದರ ಒಂದೊಂದು ಫೋಟೋ ಪ್ರತಿಗಳನ್ನು ಇಟ್ಟುಕೊಂಡಿರಬೇಕು.

ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವು ನಮೂನೆ–2 ರಲ್ಲಿ ನಿಗಧಿತ ಪ್ರಾಧಿಕಾರಿಗಳಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರಿಂದ ಮೇಲುರುಜು ಮತ್ತು ಮೊಹರು ಮಾಡಿಸಿಕೊಂಡಿರತಕ್ಕದ್ದು.

**10. ಕನ್ನಡ ಮಾಧ್ಯಮ ಅಭ್ಯರ್ಥಿಗಳು :**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್.71.ಎಸ್‌ಆರ್‌ಆರ್.2001, ದಿನಾಂಕ: 24/10/2002 ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು–1977 ರ ನಿಯಮ (9)(1)(ಸಿ) ರನ್ವಯ ಅಭ್ಯರ್ಥಿಯು 1 ರಿಂದ 10ನೇ ತರಗತಿವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರು ಪಡೆದ ಪ್ರಮಾಣ ಪತ್ರವನ್ನು ಪಡೆದುಕೊಳ್ಳತಕ್ಕದ್ದು.

**11. ಅರ್ಹತಾ ಷರತ್ತುಗಳು :**

ಅ) ಅರ್ಜಿದಾರರು ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟುಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

ಇ) ದೈಹಿಕವಾಗಿ/ಮಾನಸಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅಭ್ಯರ್ಥಿ ಹುದ್ದೆಗೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

**12. ಪ್ರಮುಖವಾದ ಸೂಚನೆಗಳು :**

ಅಭ್ಯರ್ಥಿಗಳು ಕೆಳಕಂಡ ಪ್ರಮಾಣ ಪತ್ರಗಳನ್ನು ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ಸಲ್ಲಿಸಬೇಕು.

- ಹುದ್ದೆಗೆ ನಿಗಧಿಪಡಿಸಲಾದ ವಿದ್ಯಾರ್ಹತೆಯ ಅಂಕಪಟ್ಟಿ ಪ್ರಮಾಣ ಪತ್ರ ಮತ್ತು ಕಂಪ್ಯೂಟರ್ ಜ್ಞಾನದ ಬಗ್ಗೆ ದಾಖಲೆ.
- ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ., ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ.
- ಸೈನಿಕ ಸೇವೆಯಿಂದ ಬಿಡುಗಡೆಯಾದ/ ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

- ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2, 2ಬಿ, 3ಎ, 3ಬಿ ಮೀಸಲಾತಿಯ ಪ್ರಮಾಣ ಪತ್ರಗಳು (ಮೀಸಲಾತಿ ಕೋರಿದ್ದಲ್ಲಿ)
- ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)
- ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
- ಯೋಜನೆಗಳಿಂದ ನಿರಾಶ್ರಿತರಾದ ಬಗ್ಗೆ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
- ವಿಧವೆಯಾಗಿದ್ದಲ್ಲಿ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ
- ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

13. **ದುರ್ನಡತೆ :**

ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸಿರುವುದು ಕಂಡು ಬಂದಲ್ಲಿ ಅವನು/ಅವಳು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ, ಹುದ್ದೆಯ ಆಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

14. **ಇತರೆ ಸೂಚನೆಗಳು :**

1. ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನದ ಅರಿವು ಅವಶ್ಯಕತೆ ಕಡ್ಡಾಯವಾಗಿರುತ್ತದೆ.
2. ನೇಮಕಾತಿ ಪ್ರಕ್ರಿಯೆ ಪೂರ್ಣಗೊಳ್ಳುವ ಮುನ್ನ ಯಾವುದೇ ಸಂದರ್ಭದಲ್ಲಿ ಹುದ್ದೆಗಳ ಸಂಖ್ಯೆಯನ್ನು ಹೆಚ್ಚು ಮಾಡುವ/ಕಡಿತಗೊಳಿಸುವ ಅಥವಾ ನಿಯಮಾನುಸಾರ ಅಗತ್ಯವಾದ ಯಾವುದೇ ಹೆಚ್ಚುವರಿ ಷರತ್ತುಗಳನ್ನು ವಿಧಿಸುವ ಅಥವಾ ಸಡಿಲಗೊಳಿಸುವ ಅಧಿಕಾರ ಹಾಗೂ ಯಾವುದೇ ಕಾರಣ ನೀಡದೆ ನೇಮಕಾತಿ ಪ್ರಕ್ರಿಯೆಯನ್ನು ರದ್ದುಪಡಿಸುವ ಅಧಿಕಾರ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ರವರು ಕಾಯ್ದಿರಿಸಿಕೊಂಡಿರುತ್ತಾರೆ.
3. ಸರ್ಕಾರಿ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಅರ್ಜಿಯನ್ನು ಇಲಾಖಾ ಮುಖ್ಯಸ್ಥರ ಅನುಮತಿ ಪಡೆದು ಸಲ್ಲಿಸುವುದು.
4. ಮೀಸಲಾತಿಯಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು (ಅಧ್ಯಕ್ಷರು, ಜಾತಿ ಮತ್ತು ಆದಾಯ ಪರಿಶೀಲನಾ ಸಮಿತಿ) ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.
5. ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು ನೇಮಕಾತಿ ಪ್ರಾಧಿಕಾರಿಯಾದ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ರವರು ಕಾಯ್ದಿರಿಸಿಕೊಂಡಿರುತ್ತಾರೆ.
6. ಕಾಲೇಜಿನ ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರ ಹಾಗೂ ಸ್ಥಳೀಯ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ 6 ತಿಂಗಳೊಳಗಿನ ಇತ್ತೀಚಿನ ನಡತೆ ಪ್ರಮಾಣ ಪತ್ರ ಲಗತ್ತಿಸಬೇಕು.
7. ಅಭ್ಯರ್ಥಿಗಳು ಆನ್‌ಲೈನ್‌ನಲ್ಲಿ ಪಡೆದ Acknowledgement ಹಾಗೂ Challan ನ್ನು ಬ್ಯಾಂಕ್‌ನಲ್ಲಿ ಪಾವತಿಸಿದ ನಂತರ ಅಭ್ಯರ್ಥಿಯ ಪ್ರತಿಯನ್ನು ಮಡಚುವುದಾಗಲೀ, ಹರಿಯುವುದಾಗಲೀ ಮಾಡದೇ ಹಾಳಾಗದಂತೆ ಎಚ್ಚರವಹಿಸತಕ್ಕದ್ದು.
8. ಸೇವೆಯಲ್ಲಿರುವ ಅಭ್ಯರ್ಥಿಗಳು ಅವರ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪತ್ರವನ್ನು (No Objection Certificate) ಪಡೆದು ಮೂಲ ದಾಖಲಾತಿಗಳ ಪರಿಶೀಲನಾ ಸಮಯದಲ್ಲಿ ಸಲ್ಲಿಸಬೇಕು.
9. ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು ನೇಮಕಾತಿ ಪ್ರಾಧಿಕಾರದ ಅಧ್ಯಕ್ಷರಾದ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ ಇವರು ಕಾಯ್ದಿರಿಸಿಕೊಂಡಿರುತ್ತಾರೆ.
10. ಕರ್ನಾಟಕ ಜನರಲ್ ಸರ್ವೀಸ್ (Revenue Sub-ordinated) (Cadre & Recruitment) (ತಿದ್ದುಪಡಿ) ನಿಯಮಗಳು–2008 ಮತ್ತು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು–1977 ರ ಪ್ರಕಾರ ಅಭ್ಯರ್ಥಿಯನ್ನು ಅವರು ಪಿ.ಯು.ಸಿ. ಅಥವಾ ಸಿಬಿಎಸ್‌ಸಿ. ಅಥವಾ ಐಸಿಎಸ್‌ಇ ನಡೆಸುವ 12ನೇ ತರಗತಿ ಪರೀಕ್ಷೆಯಲ್ಲಿ ಪಡೆದ ಅಂಕಗಳ (**on merit**) ಮತ್ತು ಮೀಸಲಾತಿ ಆಧಾರದ ಮೇಲೆ ಮಾತ್ರ ಆಯ್ಕೆ ಮಾಡಲಾಗುವುದು.
11. ನೇಮಕಾತಿಯು ಸಂಪೂರ್ಣವಾಗಿ ಮೆರಿಟ್ ಮತ್ತು ಮೀಸಲಾತಿ ನಿಯಮಗಳನ್ವಯ ಮಾತ್ರವೇ ನಡೆಯುತ್ತದೆ.

12. 1:5 ಅನುಪಾತದಲ್ಲಿ Provisional ಪಟ್ಟಿ ಪ್ರಕಟಿಸಲಾಗುವುದು ಹಾಗೂ ಅಭ್ಯರ್ಥಿಯ ಹೆಸರು Provisional List ನಲ್ಲಿ ನಮೂದಿಸಿದ ಮಾತ್ರಕ್ಕೆ ಅವರ ಆಯ್ಕೆ ಅಂತಿಮವಾಗಿದೆ ಎಂದು ಭಾವಿಸತಕ್ಕದ್ದಲ್ಲ. ಆಯ್ಕೆಯ ಸಂಬಂಧವಾಗಿ ಈ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರ ನಡೆಸಲು ಅವಕಾಶ ಇರುವುದಿಲ್ಲ.

**ಡಾ॥ ಎನ್.ಮಂಜುಳ, ಭಾ.ಆ.ಸೇ.,**
ಅಧ್ಯಕ್ಷರು
ಗ್ರಾಮಲೆಕ್ಕಿಗರ ನೇಮಕಾತಿ ಮತ್ತು ಆಯ್ಕೆ ಪ್ರಾಧಿಕಾರ
ಹಾಗೂ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ.

ಪಿ.ಆರ್. 130

**OFFICE OF THE REGISTRAR GENERAL, HIGH COURT OF KARNATAKA,**
**HIGH COURT BUILDINGS, BANGALORE 560 001.**

**NOTIFICATION NO. HCC. 35/2005 (HCE) DATED 07.08.2012**

**RECRUITMENT OF CANDIDATES TO THE POSTS OF HARDWARE ENGINEER AND SOFTWARE TECHNICIAN.**

**LAST DATE FOR RECEIPT OF APPLICATIONS: 07.09.2012 (5.00 P.M.)**

Applications in the prescribed proforma appended hereto are invited from the candidates, who are qualified as on the last date fixed for receipt of applications for recruitment to One post of Hardware Engineer and One post of Software Technician.

2. **Method of Recruitment:** Selection of candidate will be made in accordance with the High Court of Karnataka Service (Conditions of Service and Recruitment) Rules, 1973 as amended from time to time.

3. **Minimum Qualification:**

| Sl. No. | Name of the Post | Qualification |
|---|---|---|
| 1. | Hardware Engineer | I Class in B.E.<br>(Electronics/Electricals) and knowledge of :<br>a. Networking<br>b. Commissioning of LAN / WAN MAN<br>c. Fixing the active and passive components of networking.<br>d. Windows Server. |
| 2. | Software Technician | **BASIC QUALIFICATIONS**<br>I Class in B.E.<br>(Electronics/Computer Science)<br>OR<br>I Class in M.C.A.<br>OR<br>I Class in M.Sc<br>(Computer Science/Electronics) |

| Sl. No. | Name of the Post | Qualification |
|---|---|---|
| | | **ADDITIONAL QUALIFICATIONS**<br>Knowledge of:<br>a) Windows O.S.<br>b) Programming of V.B. Com, Activex, Dotnet, ASP.<br>c) Databases: SQL Server 2000, Stored procedure Triggers Replication concept. |

4. **Scale of Pay :** Rs.11400-300-12300-350-14400-400-16800-450-19500-525-21600

5. Classification of vacancies:

**HARDWARE ENGINEER**

1) Category – I (Others) - 1 Post

**SOFTWARE TECHNICIAN**

1) General Merit (Others) - 1 Post

6. **Probation:** The period of probation shall be two years, subject to the rules prescribed in this behalf.

7. **Age limit:** Applicants must have attained the age of 18 years and must not have attained the age of:-

   (a) 40 years in the case of a person belonging to any of the Scheduled Castes or Scheduled Tribes or Category-I of other Backward Classes.

   (b) 38 years in the case of a person belonging to any of the Category-II(a) or II(b) or III(a) or III(b) of Other Backward Classes; and

   (c) 35 years for others.

8. Applicants when called for interview must appear at their own expenses.

9. No person who attempts to obtain extraneous support by any means for his/her candidature from officials or non-officials, shall be eligible for appointment.

10. Application fee: The application (excluding applications by Scheduled Caste / Scheduled Tribe / Category-I applicants) shall accompany Crossed Indian Postal Order for Rs. 300/- (Rupees Three Hundred Only) in favour of the Registrar General, High Court of Karnataka, High Court Buildings, Bangalore 560 001. (SC/ST and Category-I candidates are exempted from payment of fee).

**Note:**- Indian Postal Order purchased before the date of publication of Notification will not be accepted.

11 (i) Candidates should submit their applications complete in all respects, together with attested copies of all the testimonials, marks cards, etc., so as to reach the Registrar General, High Court of Karnataka, High Court Buildings, Bangalore 560 001 on or before 07.09.2012 (5.00 p.m.) Envelope containing the application should be superscribed as “Application for recruitment to the post of Hardware Engineer OR Application for recruitment to the post of Software Technician”. The Candidate should clearly mention as to whether he is applying for the post of Hardware Engineer or for the post of Software Technician. Applications received beyond the time so fixed are liable to be rejected.

(ii) In-service candidates shall submit their applications through their official superiors so as to reach the Registrar General, High Court of Karnataka, High Court Buildings, Bangalore 560 001, not later than the date and time fixed for receipt of applications.

(iii) If the last date fixed for the receipt of applications happens to be a General Holiday, the next working day will be the last date for receipt of applications.

12. **Application Form:-** Application in the prescribed proforma must be accompanied by the following, failing which their applications shall be liable to be rejected:-

(a) Three Character Certificates, one from the Principal of the College or Institution in which he/she had last studied and two from respectable persons unconnected with his / her College or University, and not related to him / her testifying to his/her character (true copies).

(b) True copies of marks card of SSLC, Qualifying Examination prescribed as at Sl. No.3 and relevant certificates to show that the candidate posses the additional qualification as mentioned in the Table above.

(c) True copies of SSLC or any other equivalent examination certificate in proof of date of birth.

(d) Persons claiming the benefit for reservations under SC/ST shall produce a certificate in the form prescribed by the Government (true copies).

(e) Persons claiming the benefit of reservations under Category-I/II(a)/II(b)/III(a)/III(b) shall produce a certificate in the form prescribed by the Government (true copies).

(f) Crossed Indian Postal Order for Rs. 300/- (Rupees Three Hundred) only.

(g) Passport size photograph shall be affixed at the space in the application.

***Note:*** Incomplete applications are liable to be rejected without notice. Original certificates and testimonials need not be enclosed with the application, but they shall be submitted only at the time of interview and only copies of the certificates shall be enclosed with the applications.

BY ORDER OF HON'BLE THE CHIEF JUSTICE,

**P. KRISHNA BHAT**

REGISTRAR GENERAL

**FORM OF APPLICATION FOR RECRUITMENT TO THE POSTS OF HARDWARE ENGINEER / SOFTWARE TECHNICIAN IN THE HIGH COURT OF KARNATAKA, BANGALORE.**

PHOTO OF THE APPLICANT

**To**
**The Registrar General,**
**High Court of Karnataka,**
**Bangalore.**

| | | | |
|---|---|---|---|
| 1. | Name of the applicant in full (in block letters) | : | |
| 2. | Name of his/her father/husband | : | |
| 3. | Sex | | |

| | | | |
|---|---|---|---|
| 4. | Age and Date of Birth (as mentioned in the SSLC or equivalent certificate) | : | |
| 5. | Postal Address<br>(in block letters)<br>(a) permanent postal address<br>(b) present postal address | : | |
| 6. | Whether the applicant is presently employed? If so furnish the details of employment and monthly income. | | |
| 7. | Occupation of Parents / Guardian. | : | |
| 8. | Annual Income of Parents / Guardian. | : | |
| 9. | Qualification | : | |
| 10. | Additional Qualification, if any | | |
| 11. | a) Whether the Applicant belongs to Scheduled Castes / Scheduled Tribes / Category-I / Category-II(a) / II(b) / III(a) / III (b). If so, the same should be indicated. A copy of the Certificate in support of the claim should be attached. | | |
| 12. | Whether the applicant has credited the prescribed fee in the form of postal order and whether he/she has enclosed the same. (Mention the postal order number and date). | : | |
| 13. | Whether the applicant claims quota of Physically handicapped/Displaced from Projects. If so whether relevant certificate issued by competent authority is enclosed. | : | |
| 14. | Whether the applicant is / was a Party to any Criminal proceedings. If yes, furnish detailed information. | | |

I do hereby solemnly and sincerely affirm that the statement made and the information furnished above are true. Should it however be found that any information furnished herein is untrue in material particulars, I realise that I am liable to criminal prosecution and I am also agreeable to forego the claim for public services under the State Government.

**PLACE :**

**DATE :** **SIGNATURE OF THE CANDIDATE.**

**PR - 131**

**ಅಧ್ಯಕ್ಷರು, ಆಯ್ಕೆ ಮತ್ತು ನೇರ ನೇಮಕಾತಿ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ.**

**ಅಧಿಸೂಚನೆ**

**ಸಂಖ್ಯೆ: ಸಿಬ್ಬಂದಿ: ಸಿಆರ್/7/2010–11 ದಿನಾಂಕ 02–08–2012**

**ಉಲ್ಲೇಖ:–** (1) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 299 ಬಿಎಸ್‌ಸಿ 2006 ದಿನಾಂಕ 03–02–2009

(2) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 299 ಬಿಎಸ್‌ಸಿ 2006 ದಿನಾಂಕ 24–07–2009

(3) ಸರ್ಕಾರದ ಪತ್ರ ಸಂಖ್ಯೆ:ಕಂಇ 04 ಬಿಎಸ್‌ಸಿ 2011 ದಿನಾಂಕ 25–02–2011

(4) ಸರ್ಕಾರದ ಪತ್ರ ಸಂಖ್ಯೆ:ಕಂಇ 33 ಡಿಎಸ್‌ಪಿ 2012 ದಿನಾಂಕ 05–06–2012

ಕೊಡಗು ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಿಗರ ಹುದ್ದೆಗಳನ್ನು ಹಾಗೂ ಉಲ್ಲೇಖ (4)ರ ಆದೇಶದಂತೆ ಹೊಸದಾಗಿ ಸ್ಥಾಪಿಸುವ ನಾಡಕಛೇರಿಗಳಿಗೆ ಸೃಜಿಸಿರುವ ಗ್ರಾಮ ಲೆಕ್ಕಾಧಿಕಾರಿಗಳ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ On line ಮುಖಾಂತರ ಅರ್ಜಿಯನ್ನು ಆಹ್ವಾನಿಸಲಾಗಿದೆ.

ಅರ್ಜಿ ನಮೂನೆಗಳನ್ನು ಇಲಾಖೆಯ ಅಧಿಕೃತ ವೆಬ್ ಸೈಟ್ ವಿಳಾಸ–http://kodagu-va.kar.nic.in ನಲ್ಲಿ ಅಳವಡಿಸಲಾಗಿದೆ. ಅರ್ಜಿಗಳು **ದಿನಾಂಕ 02–08–2012** ರಿಂದ ಸದರಿ ವೆಬ್ ಸೈಟ್‌ನಲ್ಲಿ ಚಾಲನೆಯಲ್ಲಿರುತ್ತದೆ. ಅರ್ಜಿಗಳನ್ನು ಆನ್–ಲೈನ್ ಮುಖಾಂತರ ಮಾತ್ರ ಸಲ್ಲಿಸತಕ್ಕದ್ದು. ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಸಲ್ಲಿಸಲು ಅವಕಾಶವಿರುವುದಿಲ್ಲ. ಅರ್ಜಿಗಳನ್ನು **ಆನ್‌ಲೈನ್‌ನಲ್ಲಿ ದಿನಾಂಕ 31–08–2012 ರೊಳಗೆ ಸಲ್ಲಿಸತಕ್ಕದ್ದು. ಅರ್ಜಿ ಶುಲ್ಕವನ್ನು ಬ್ಯಾಂಕ್‌ಗೆ ಪಾವತಿ ಮಾಡಲು ಕೊನೆಯ ದಿನಾಂಕ:02–09–2012 ಆಗಿರುತ್ತದೆ.**

| ಕ್ರ.ಸಂ | ಹುದ್ದೆಯ ಹೆಸರು | ಒಟ್ಟು ಹುದ್ದೆ | ವಿದ್ಯಾರ್ಹತೆ | ವೇತನ ಶ್ರೇಣಿ |
|---|---|---|---|---|
| 01 | ಗ್ರಾಮಲೆಕ್ಕಿಗ | 19 | ದ್ವಿತೀಯ ಪಿ.ಯು.ಸಿ ಅಥವಾ 12 ನೇ ತರಗತಿ (12th Standard Examination conducted by Central Board of Secondary Education or ICSE) ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು | 11600–200–12000–250–13000–300–14200–350–15600–400–17200–450–19000–500–21000 |

| ಕ್ರ.ಸಂ | ಹುದ್ದೆಯ ಹೆಸರು | ಒಟ್ಟು ಹುದ್ದೆ | ವರ್ಗೀಕರಣ | | | | | | | |
|---|---|---|---|---|---|---|---|---|---|---|
| | | **19** | ಇತರೆ | ಮಹಿಳೆ | ಗ್ರಾಮೀಣ | ಅಂ.ವಿ | ಮಾ.ಸೈ | ಕ.ಮಾ.ಅ | ಯೋ.ನಿ.ಅ | ಒಟ್ಟು |
| ಖಾಲಿ ಇರುವ ಹುದ್ದೆಗಳು | | | | | | | | | | |
| 01 | ಗ್ರಾಮ ಲೆಕ್ಕಿಗ | ಪ.ಜಾ | 01 | 01 | 00 | 00 | 00 | 00 | 00 | **02** |
| | | ಪ.ಪಂ | 00 | 01 | 00 | 00 | 00 | 00 | 00 | **01** |
| | | ಪ್ರ–1 | 00 | 00 | 00 | 00 | 00 | 00 | 00 | **00** |
| | | ಪ್ರ–2ಎ | 01 | 01 | 01 | 00 | 00 | 00 | 00 | **03** |
| | | ಪ್ರ–2ಬಿ | 00 | 01 | 00 | 00 | 00 | 00 | 00 | **01** |
| | | ಪ್ರ–3ಎ | 00 | 01 | 00 | 00 | 00 | 00 | 00 | **01** |
| | | ಪ್ರ–3ಬಿ | 00 | 01 | 00 | 00 | 00 | 00 | 00 | **01** |
| | | ಸಾಮಾನ್ಯ ಅಭ್ಯರ್ಥಿ | 02 | 03 | 02 | 01 | 01 | 00 | 01 | **10** |
| | | **ಒಟ್ಟು** | **04** | **09** | **03** | **01** | **01** | **00** | **01** | **19** |

**ವರ್ಗೀಕರಣ**

1) ಮಾ.ಸೈ–ಮಾಜಿ ಸೈನಿಕರು 2) ಕ.ಮಾ.ಅ–ಕನ್ನಡ ಮಾಧ್ಯಮ ಅಭ್ಯರ್ಥಿ

3) ಯೋ.ನಿ.ಅ–ಯೋಜನಾ ನಿರಾಶ್ರಿತರು 4) ಅಂ.ವಿ–ಅಂಗವಿಕಲರು

**ಅರ್ಜಿ ಸಲ್ಲಿಸುವ ವಿಧಾನ:**

ಅಭ್ಯರ್ಥಿಯು ಇಲಾಖೆಯ ಅಧಿಕೃತ ವೆಬ್‌ಸೈಟ್ http://kodagu-va.kar.nic.in ನ್ನು ತೆರೆದು ಕಂಪ್ಯೂಟರ್ ಪರದೆಯ ಮೇಲೆ ಅರ್ಜಿಯನ್ನು ತುಂಬಬೇಕು. ಅಭ್ಯರ್ಥಿಯು Submit Button ಅನ್ನು ಒತ್ತಿದರೆ ಅರ್ಜಿ ಸಂಖ್ಯೆ (Reference Number) ಸೃಷ್ಟಿಯಾಗುತ್ತದೆ. ಆನ್‌ಲೈನ್ ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯರ್ಥಿಗಳು ಸ್ವೀಕೃತಿ ಪತ್ರ (Acknowledgement Slip) ಮತ್ತು ದ್ವಿಪ್ರತಿ ಚಲನ್ ಅನ್ನು ತೆಗೆದುಕೊಳ್ಳತಕ್ಕದ್ದು.

**ಅರ್ಜಿ ಶುಲ್ಕ**

ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ –1 ರ ಅಭ್ಯರ್ಥಿಗಳಿಗೆ : ರೂ 100–00

ಸಾಮಾನ್ಯ ವರ್ಗ, 2ಎ, 2ಬಿ, 3ಎ, 3ಬಿ ವರ್ಗದ ಅಭ್ಯರ್ಥಿಗಳಿಗೆ : ರೂ 200–00

ಬ್ಯಾಂಕ್ ಶುಲ್ಕ : ರೂ. 25–00

ಕಂಪ್ಯೂಟರ್‌ನಲ್ಲಿ ಮುದ್ರಿಸಿದ ಚಲನ್‌ನಂತೆ ಅರ್ಜಿ ಶುಲ್ಕವನ್ನು ಯಾವುದಾದರೂ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಬ್ಯಾಂಕಿನಲ್ಲಿ **A/C No.64100580615 ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಮಡಿಕೇರಿ ಬ್ಯಾಂಕ್ ಖಾತೆಗೆ ಪಾವತಿಸಿ, ಸ್ವೀಕೃತಿಯನ್ನು ಪಡೆಯಬೇಕು.** ಪಾವತಿ ಮಾಡಿದ ಚಲನ್ ಕೌಂಟರ್ ಫೈಲನ್ನು ಸ್ಕ್ಯಾನ್ ಮಾಡಿ ಇದೇ ವೆಬ್‌ಸೈಟ್‌ನಲ್ಲಿ ಚಲನ್ ಸಂಖ್ಯೆ, ದಿನಾಂಕಗಳೊಂದಿಗೆ ಅಪ್‌ಲೋಡ್ ಮಾಡುವುದು. ಅಭ್ಯರ್ಥಿಗಳು ಸ್ವೀಕೃತಿ ಸ್ಲಿಪ್‌ನ್ನು ಮತ್ತು ಚಲನ್ ಪಾವತಿಯ ಒಂದು ಪ್ರತಿಯನ್ನು ಕಡ್ಡಾಯವಾಗಿ ತಮ್ಮ ಬಳಿ ಇರಿಸಿಕೊಳ್ಳತಕ್ಕದ್ದು. ಇನ್ನೊಂದು ಚಲನ್ ಪ್ರತಿ ಬ್ಯಾಂಕ್ ಬಳಿ ಇರುತ್ತದೆ. ಈ ದಾಖಲೆಗಳನ್ನು ನಿಗಧಿಪಡಿಸಿದ ದಿನಾಂಕದಂದು ಹಾಜರುಪಡಿಸತಕ್ಕದ್ದು.

**ಅಭ್ಯರ್ಥಿಗಳಿಗೆ ಸೂಚನೆ ಮತ್ತು ಷರತ್ತುಗಳು:**

1. ಅರ್ಜಿಗಳನ್ನು ಆನ್‌ಲೈನ್ ಮೂಲಕ ಮಾತ್ರ ಸಲ್ಲಿಸತಕ್ಕದ್ದು. ಅಂಚೆ ಅಥವಾ ಕೊರಿಯರ್ ಅಥವಾ ಖುದ್ದಾಗಿ ಸ್ವೀಕರಿಸಲಾಗುವುದಿಲ್ಲ.
2. ವಯೋಮಿತಿ: ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದಂದು ಕೆಳಕಂಡ ವಯೋಮಿತಿ ಹೊಂದಿರತಕ್ಕದ್ದು.

| | | | |
|---|---|---|---|
| ಪ.ಜಾ / ಪ.ಪಂ., ಪ್ರವರ್ಗ–1 | : | ಕನಿಷ್ಠ–18 | ಗರಿಷ್ಠ – 40 |
| ಹಿಂದುಳಿದ ವರ್ಗ | : | ಕನಿಷ್ಠ–18 | ಗರಿಷ್ಠ – 38 |
| ಸಾಮಾನ್ಯ ವರ್ಗ | : | ಕನಿಷ್ಠ–18 | ಗರಿಷ್ಠ – 35 |

**ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಕೆಳಗೆ ತಿಳಿಸುವಷ್ಟರ ಮಟ್ಟಿಗೆ ನಿಗಧಿಪಡಿಸಿದೆ.**

ಅ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು/ಅವಳು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವರೋ ಅಷ್ಟು ವರ್ಷಗಳಿಗೆ 3 ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

ಆ) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು

ಇ) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು

3.ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನದ ಅವಶ್ಯಕತೆ ಕಡ್ಡಾಯವಾಗಿರುತ್ತದೆ.

4. ಅಭ್ಯರ್ಥಿಗಳಿಗೆ ಗಣಕಯಂತ್ರದ ಬಗ್ಗೆ ಜ್ಞಾನವಿರಬೇಕು ಮತ್ತು ಪ್ರಮಾಣ ಪತ್ರ ಹಾಜರುಪಡಿಸಬೇಕು

5. ನಿಗದಿತ ದಿನಾಂಕದ ನಂತರ ಹಾಕಿದ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.

6. ಸರ್ಕಾರಿ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಆನ್‌ಲೈನ್‌ನಲ್ಲಿ ಭರ್ತಿ ಮಾಡಿದ ಅರ್ಜಿ ಪ್ರತಿಯನ್ನು ನೇಮಕಾತಿ ಪ್ರಾಧಿಕಾರ / ಇಲಾಖಾ ಮುಖ್ಯಸ್ಥರ ಮುಖಾಂತರ ಅರ್ಜಿಯನ್ನು ಸಲ್ಲಿಸುವುದು.

7. ಅಭ್ಯರ್ಥಿಗಳ ಆಯ್ಕೆ ಬಗ್ಗೆ ಪ್ರಚಾರ ಅಥವಾ ಶಿಫಾರಸ್ಸುಗಳನ್ನು ಮಾಡಿದರೆ ಅಂಥವರ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

8. ಅರ್ಜಿದಾರರೂಡನೆ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

9. ಜಾತಿ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು (ಅಧ್ಯಕ್ಷರು ಜಾತಿ ಆದಾಯ ಪರಿಶೀಲನಾ ಸಮಿತಿ) ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.

9. ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು ನೇಮಕಾತಿ ಪ್ರಾಧಿಕಾರಿಯಾದ ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ, ರವರು ಕಾಯ್ದಿರಿಸಿಕೊಂಡಿರುತ್ತಾರೆ.

10. ಆಯ್ಕೆಯನ್ನು ಅಭ್ಯರ್ಥಿಯ ***ಮೆರಿಟ್*** ಆಧಾರದ ಮೇಲೆ ಮಾತ್ರ ಪರಿಗಣಿಸಲಾಗುವುದು.

**11. ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು: –**

ಮೀಸಲಾತಿ ಸೌಲಭ್ಯ ಅಪೇಕ್ಷಿಸುವ ಅಭ್ಯರ್ಥಿಗಳು ಈ ಕೆಳಕಂಡ ಮೂಲ ದಾಖಲೆಗಳನ್ನು ನಿಗಧಿತ ನಮೂನೆಯಲ್ಲಿ ಸಂಬಂಧಪಟ್ಟ ರೆವಿನ್ಯೂ ಪ್ರಾಧಿಕಾರದಿಂದ (ಸಂಬಂಧಪಟ್ಟ ತಹಸೀಲ್ದಾರ್ ರಿಂದ)ಪಡೆದು ಪರಿಶೀಲಿಸುವ ದಿನಾಂಕದಂದು ಹಾಜರುಪಡಿಸಬೇಕು ತಪ್ಪಿದ್ದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ಪರಿಗಣಿಸಲಾಗುವುದಿಲ್ಲ.

**ಪ.ಜಾ / ಪ.ಪಂ.** * ನಮೂನೆ– ಡಿ ಯಲ್ಲಿ, **ಪ್ರವರ್ಗ –1 :** * ನಮೂನೆ– ಇ ಯಲಿ **ಪ್ರವರ್ಗ 2ಎ, 2ಬಿ, 3ಎ, 3ಬಿ :** * ನಮೂನೆ– ಎಫ್ ನಲ್ಲಿ ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ಚಾಲ್ತಿಯಲ್ಲಿರುವ ಪ್ರಮಾಣಪತ್ರವನ್ನು ಪಡೆದಿರಬೇಕು

**12. ಯೋಜನೆ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು:**

ಯೋಜನಾ ನಿರಾಶ್ರಿತರ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿಡಲಾದ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು ಸಂಬಂಧಿಸಿದ ತಹಸೀಲ್ದಾರ್ ರವರು ನೀಡಿದ ಪ್ರಮಾಣ ಪತ್ರಗಳನ್ನು ಪಡೆದಿರಬೇಕು

**13. ಮಾಜಿ ಸೈನಿಕರ ಕುಟುಂಬದ ಅಭ್ಯರ್ಥಿಗಳು :**

ಮಾಜಿ ಸೈನಿಕರು ಎನ್ನುವ ಬಗ್ಗೆ ಅಥವಾ ಭಾರತ ದೇಶದ ಒಕ್ಕೂಟ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುತ್ತಿರುವಾಗ ಮರಣ ಹೊಂದಿದ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರು ಎಂಬ ಬಗ್ಗೆ ಸಕ್ಷಮ ಮಿಲಿಟರಿ ಅಧಿಕಾರಿ ಗಳಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

**14. ಅಂಗವಿಕಲ ಅಭ್ಯರ್ಥಿಗಳು :**

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 9(1–ಎ) ಅನ್ವಯ ರಾಜ್ಯ ಸಿವಿಲ್ ಸೇವೆಯಲ್ಲಿನ ಗ್ರೂಪ್ ಸಿ ಹುದ್ದೆಗಳ ನೇರ ನೇಮಕಾತಿಯಲ್ಲಿ ಅಂಗವಿಕಲರ ಶೇಕಡಾ 5ರಷ್ಟು ಸಮತಳ ಮೀಸಲಾತಿ ಕಲ್ಪಿಸಲಾಗಿದೆ. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 54 ಸೇನೆನಿ 2012 ದಿನಾಂಕ 23–06–2012 ರಂತೆ ಅಂಗವಿಕಲರ ಮೀಸಲಾತಿಯನ್ನು ಈ ಕೆಳಕಂಡ ವರ್ಗಗಳಿಗೆ ಮಾತ್ರ ಕಲ್ಪಿಸಲಾಗಿದೆ.

**i. ಕುಷ್ಟರೋಗದಿಂದ ಗುಣಮುಖರಾದವರು (Leprosy cured)**

**ii. ಶ್ರವಣ ದೋಷವುಳ್ಳವರು (Hearing impaired)**

**iii .ಮಾನಸಿಕ ಅಸ್ವಸ್ಥತೆ (Mentally ill)**

**iv. ಚಲನವಲನ ವೈಫಲ್ಯ (Locomotor disability or cerebral palsy)**

**ಈ ಮೇಲಿನ ಅಂಗವಿಕಲರು ಹೊರತುಪಡಿಸಿ ಇತರ ದೈಹಿಕ ಅಂಗವಿಕಲತೆವುಳ್ಳ ಅಭ್ಯರ್ಥಿಗಳು ಗ್ರಾಮ ಲೆಕ್ಕಿಗರ ಹುದ್ದೆಗಳಲ್ಲಿ ಅಂಗವಿಕಲರ ಮೀಸಲಾತಿಯಡಿ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.**

ಸರ್ಕಾರದ ಅಧಿಕೃತ ಜ್ಞಾಪನ ಸಂ:ಸಿಆಸುಇ 128 ಸೇನೆನಿ 2005 ದಿನಾಂಕ: 19–11–2005 ರಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಸಂಬಂಧಪಟ್ಟ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯು ನೀಡುವ ಪ್ರಮಾಣ ಪತ್ರವನ್ನು ಪಡೆದು ಕೊಂಡಿರತಕ್ಕದ್ದು. ಬೇರೆ ಯಾವುದೇ ನಮೂನೆಗಳಲ್ಲಿ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ.

**15. ಗ್ರಾಮೀಣ ಅಭ್ಯರ್ಥಿಗಳು :**

ಗ್ರಾಮೀಣ ಅಭ್ಯರ್ಥಿ ಎಂದರೆ, ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯು ಎಸ್. ಎಸ್.ಎಲ್.ಸಿ ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10 ನೇ ತರಗತಿಯವರೆಗೆ ವ್ಯಾಸಂಗದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರಿಯಿಂದ ದೃಢೀಕೃತ ಗ್ರಾಮೀಣ ಧೃಡೀಕರಣ ಪತ್ರವನ್ನು ಪಡೆದಿರಬೇಕು ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು ಗ್ರಾಮೀಣ ಅಭ್ಯರ್ಥಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮು ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ–2ರ ಪ್ರಮಾಣ ಪತ್ರವಲ್ಲದೇ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂದಪಟ್ಟ ತಹಸೀಲ್ದಾರ್ ರವರಿಂದ ಪಡೆದು,. ಅಂತೆಯೆ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಪ್ರವರ್ಗ–1, ಪ್ರವರ್ಗ –2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ–2ರಲ್ಲಿ ನಿಗಧಿತ ಪ್ರಾದಿಕಾರಿಗಳಿಂದ ಪಡೆದು ಸಂಬಂದಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರಿಂದ ಮೇಲು ರುಜು ಮತ್ತು ಮೊಹರು ಮಾಡಿಸಿರಬೇಕು

**16. ಕನ್ನಡ ಮಾಧ್ಯಮ ಅಭ್ಯರ್ಥಿಗಳು :**

ಸರ್ಕಾರದ ಅಧಿಸೂಚನೆ ಸಂ: ಡಿಪಿಎಆರ್ 71 ಎಸ್ ಆರ್ ಆರ್ 2001 ದಿ: 24.10.2002 ರಲ್ಲಿ ಹೊರಡಿಸಿರುವ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ (9) (1) (ಸಿ) ರನ್ವಯ ಅಭ್ಯರ್ಥಿಯು 1ರಿಂದ 10 ನೇ ತರಗತಿಯವರೆಗೆ ಕನ್ನಡ

ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರು ಮಾಡಿದ ಪ್ರಮಾಣ ಪತ್ರವನ್ನು ಪಡೆದಿರಬೇಕು

**17. ಅರ್ಹತಾ ಷರತ್ತುಗಳು :**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು. ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟುಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನ್ಯತೆಯಿಂದ ಮುಕ್ತರಾಗಿರಬೇಕು.

ಇ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ಆಯ್ಕೆ ಪ್ರಾಧಿಕಾರ/ರಾಜ್ಯ ಸರ್ಕಾರ ಕಾಯ್ದಿರಿಸಿಕೊಂಡಿದೆ ಮತ್ತು ಆಯ್ಕೆ ಪ್ರಾಧಿಕಾರದ ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ. ನಿಗಧಿತ ಶೈಕ್ಷಣಿಕ ಅರ್ಹತೆ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಹೊಂದಿರಬೇಕು.

**18. ಕೆಳಕಂಡ ಮೂಲ ದಾಖಲೆಗಳನ್ನು ದಾಖಲಾತಿಗಳ ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸಬೇಕು :**

- ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಅಂಕಪಟ್ಟಿ / ಪ್ರಮಾಣ ಪತ್ರ ಮತ್ತು ಕಂಪ್ಯೂಟರ್ ಜ್ಞಾನದ ಬಗ್ಗೆ ದಾಖಲೆ
- ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ / ಜನ್ಮ ದಿನಾಂಕವನ್ನು ತೋರಿಸುವ ಶೈಕ್ಷಣಿಕ ಸಂಚಿತ ದಾಖಲೆಯ ಉದ್ಧೃತ ಭಾಗ.
- ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ)
- ಪರಿಶಿಷ್ಠ ಜಾತಿ / ಪರಿಶಿಷ್ಠ ಪಂಗಡ, ಪ್ರವರ್ಗ–1, ಪ್ರವರ್ಗ –2ಎ, ಪ್ರವರ್ಗ –2ಬಿ, ಪ್ರವರ್ಗ– 3ಎ, 3ಬಿ, ಗಳ ಪ್ರಮಾಣ ಪತ್ರಗಳು (ಮೀಸಲಾತಿ ಕೋರಿದ್ದಲ್ಲಿ ).
- ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ (ಮೀಸಲಾತಿ ಕೋರಿದ್ದಲ್ಲಿ ).
- ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ).
- ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ ).
- ಯೋಜನೆಗಳಿಂದ ನಿರಾಶ್ರಿತರಾದ ಬಗ್ಗೆ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ).
- ವಿಧವೆಯಾದಲ್ಲಿ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.

ಮೇಲ್ಕಂಡಂತೆ ನಿಗದಿಪಡಿಸಿದ ಎಲ್ಲಾ ದಾಖಲೆಗಳನ್ನು ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಮಾತ್ರ ದಾಖಲಾತಿಗಳ ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸತಕ್ಕದ್ದು.

**19. ಇತರೆ ಸೂಚನೆಗಳು :**

1. ಅರ್ಜಿಯಲ್ಲಿ ತಪ್ಪು/ಸುಳ್ಳು ಮಾಹಿತಿ ನೀಡಿ ಉದ್ಯೋಗ ಪಡೆಯುವ ಅಭ್ಯರ್ಥಿಗಳ ನೇಮಕಾತಿಯನ್ನು ವಜಾಗೊಳಿಸುವುದಲ್ಲದೆ ಕ್ರಿಮಿನಲ್ ಮೊಕದ್ದಮೆ ದಾಖಲಿಸಲಾಗುವುದು.
2. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೇ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.
3. ಅರ್ಜಿಯಲ್ಲಿ ನೀಡುವ ವಿಳಾಸವೇ ಅಂತಿಮವಾಗಿದ್ದು ಎಲ್ಲಾ ಪತ್ರ ವ್ಯವಹಾರಗಳನ್ನು ಅದೇ ವಿಳಾಸಕ್ಕೆ ಕಳುಹಿಸಿ ಕೊಡಲಾಗುವುದು. ನಂತರದಲ್ಲಿ ವಿಳಾಸ ಬದಲಾವಣೆ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಪರಿಗಣಿಸಲಾಗುವುದಿಲ್ಲ.
4. ಅರ್ಹ ಅಭ್ಯರ್ಥಿಗಳು ಅರ್ಜಿಯನ್ನು ಭರ್ತಿ ಮಾಡುವ ಮುನ್ನ ವೆಬ್ ಸೈಟ್‌ನಲ್ಲಿ ತಿಳಿಸಿರುವ ಸೂಚನೆಗಳನ್ನು ಪಾಲಿಸುವುದು.
5. ಅಭ್ಯರ್ಥಿಯ ಹೆಸರು ಅಂತಿಮ ಆಯ್ಕೆಪಟ್ಟಿಯಲ್ಲಿ ಸೇರ್ಪಡೆಯಾಗಿದೆ ಎಂಬುದರ ಆಧಾರದ ಮೇಲೆ ಅಭ್ಯರ್ಥಿಗೆ ನೇಮಕಾತಿಯ ಹಕ್ಕು ದೊರೆಯುವುದಿಲ್ಲ.
6. ಹೆಚ್ಚಿನ ಮಾಹಿತಿಗಾಗಿ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಈ ಕೆಳಕಂಡಂತೆ ಸಂಪರ್ಕಿಸತಕ್ಕದ್ದು.

1) ಇ–ಮೇಲ್ : deo.kodagu@gmail.com

2) ದೂರವಾಣಿ : 08272–225811

3) ಫಾಕ್ಸ್ ನಂ : 08272–225900

**ಅಧ್ಯಕ್ಷರು,**

ಆಯ್ಕೆ ಮತ್ತು ನೇರ ನೇಮಕಾತಿ ಪ್ರಾಧಿಕಾರ ಹಾಗೂ

ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 126

## IN THE COURT OF THE 3RD DISTRICT JUDGE AT TUMKUR.

## P & SC NO.67/2012.

**Petitioner:** Veerabhadraiah aged about 62 years, S/o Late Maleveerappa,
R/ at Srinivasa Nursing Home Road, Nisarga Badavane, Tumkur town.

**V/S**

**Respondents:** **Nil**

## NOTICE BY WAY OF PAPER PUBLICATION

Whereas the petitioner has filed this petition seeking issue of probate in respect to the registered will dated 26-7-1999 executed by Maleveeraiah S/O Late, Veerabhadraiah and for such other reliefs in respect of the property stated below.

It is notified to all that any persons interested in the property mentioned below are directed to appear before the aforesaid Hon'ble court either in person or through their counsels on 20/9/2012, failing which the matter will be heard and decided on the available records.

### SCHEDULE

All the piece and parcel of the land bearing sy, no, 31 measuring 2-07 ½ guntas situated at Hirehalli village, Urdigere hobli, Tumkur taluk assessed at Rs7,52 paise bound by.

East: Property of Shivaswamy, Jayanna and Nataraju sons of Late, H.C Shivanna. West: Property of H.C. Basavaraju. North: Property of Channabasappa. South: Railway boundary.

By the order of the Hon'ble 3rd Addl, District Judge at Tumkur, Karnataka state.

By order of the court Chief Administrative officer,
District Court, Tumkur, Karnataka State

**P.D. 95**

## KARNATAKA PUBLIC SERVICE COMMISSION
### (DEPARTMENTAL EXAMINATIONS)
### UDYOGA SOUDHA : BANGALORE - 1.

**ADDENDUM**

**No.DE(1) 1166/11-12/PSC Dated : 16/11/2011**

The results of the Departmental Examinations I-Session 2011 held by the Commission during June and July 2011 is as follows :

1) The Subject-wise Provisional List of Register Numbers of the candidates who have passed is given in APPENDIX-A.
2) The Subject-wise list of Register Numbers who have passed only in certain papers by obtaining exemption and who have obtained the exemption being a Law or Commerce graduate is given in APPENDIX-B.
3) The Subject-wise list of Register Numbers of the candidates exempted from appearing for a particular paper or papers, subject to passing the examination as a whole within the next two years is given in APPENDIX-C.
4) List of with-held register numbers of the candidates is given in APPENDIX-D.

**APPENDIX – A**

**Centre : BANGALORE**

**KANNADA LANGUAGE**

FIRST CLASS : 15463

PASS CLASS : 15729 16035 16750 17119

**Secretary and Controller Departmental Examinations**
Karnataka Public Service Commission, Bangalore.

## KARNATAKA PUBLIC SERVICE COMMISSION
### (DEPARTMENTAL EXAMINATIONS)
### UDYOGA SOUDHA : BANGALORE - 1.

**ADDENDUM**

**No.DE(1) 1166/11-12/PSC Dated : 16/11/2011**

The results of the Departmental Examinations I-Session 2011 held by the Commission during June and July 2011 is as follows :

1) The Subject-wise Provisional List of Register Numbers of the candidates who have passed is given in APPENDIX-A.
2) The Subject-wise list of Register Numbers who have passed only in certain papers by obtaining exemption and who have obtained the exemption being a Law or Commerce graduate is given in APPENDIX-B.
3) The Subject-wise list of Register Numbers of the candidates exempted from appearing for a particular paper or papers, subject to passing the examination as a whole within the next two years is given in APPENDIX-C.
4) List of with-held register numbers of the candidates is given in APPENDIX-D.

**APPENDIX - A**

**Centre : BIDAR**

**KANNADA LANGUAGE**

FIRST CLASS : - N I L -

PASS CLASS : 21340

**Secretary and Controller Departmental Examinations**

Karnataka Public Service Commission, Bangalore.

## KARNATAKA PUBLIC SERVICE COMMISSION
### (DEPARTMENTAL EXAMINATIONS)
### UDYOGA SOUDHA : BANGALORE - 1.

**ADDENDUM**

**No.DE(1) 1166/11-12/PSC Dated : 16/11/2011**

The results of the Departmental Examinations I-Session 2011 held by the Commission during June and July 2011 is as follows :

1) The Subject-wise Provisional List of Register Numbers of the candidates who have passed is given in APPENDIX-A.
2) The Subject-wise list of Register Numbers who have passed only in certain papers by obtaining exemption and who have obtained the exemption being a Law or Commerce graduate is given in APPENDIX-B.
3) The Subject-wise list of Register Numbers of the candidates exempted from appearing for a particular paper or papers, subject to passing the examination as a whole within the next two years is given in APPENDIX-C.
4) List of with-held register numbers of the candidates is given in APPENDIX-D.

**APPENDIX - A**

**Centre : BIJAPUR**

**KANNADA LANGUAGE**

FIRST CLASS : - N I L -

PASS CLASS : 22390

**Secretary and Controller Departmental Examinations**

Karnataka Public Service Commission, Bangalore.

## KARNATAKA PUBLIC SERVICE COMMISSION
### (DEPARTMENTAL EXAMINATIONS)
### UDYOGA SOUDHA : BANGALORE - 1.

**ADDENDUM**

**No.DE(1) 1166/11-12/PSC Dated : 16/11/2011**

The results of the Departmental Examinations I-Session 2011 held by the Commission during June and July 2011 is as follows :

1) The Subject-wise Provisional List of Register Numbers of the candidates who have passed is given in APPENDIX-A.
2) The Subject-wise list of Register Numbers who have passed only in certain papers by obtaining exemption and who have obtained the exemption being a Law or Commerce graduate is given in APPENDIX-B.
3) The Subject-wise list of Register Numbers of the candidates exempted from appearing for a particular paper or papers, subject to passing the examination as a whole within the next two years is given in APPENDIX-C.
4) List of with-held register numbers of the candidates is given in APPENDIX-D.

**APPENDIX - A**

**Centre : MANGALORE**

**KANNADA LANGUAGE**

FIRST CLASS : 38241

**Secretary and Controller Departmental Examinations**
Karnataka Public Service Commission, Bangalore.

## KARNATAKA PUBLIC SERVICE COMMISSION
### (DEPARTMENTAL EXAMINATIONS)
### UDYOGA SOUDHA : BANGALORE - 1.

**ADDENDUM**

**No.DE(1) 1166/11-12/PSC Dated : 16/11/2011**

The results of the Departmental Examinations I-Session 2011 held by the Commission during June and July 2011 is as follows :

1) The Subject-wise Provisional List of Register Numbers of the candidates who have passed is given in APPENDIX-A.
2) The Subject-wise list of Register Numbers who have passed only in certain papers by obtaining exemption and who have obtained the exemption being a Law or Commerce graduate is given in APPENDIX-B.
3) The Subject-wise list of Register Numbers of the candidates exempted from appearing for a particular paper or papers, subject to passing the examination as a whole within the next two years is given in APPENDIX-C.
4) List of with-held register numbers of the candidates is given in APPENDIX-D.

**APPENDIX - A**

**Centre : RAMANAGARA**

**KANNADA LANGUAGE**

FIRST CLASS : 41307

**Secretary and Controller Departmental Examinations**
Karnataka Public Service Commission, Bangalore.

**P.R. 127**

## IN THE COURT OF THE IV ADDITIONAL CITY CIVIL JUDGE, MAYOHALL, BANGALORE

### P & S.C. No. 25028 of 12

1. Smt. Raziya Sulthana, Aged about 33 years,
   w/o late Mohammed Rafiq.
2. Master Mohammed Afnan, Aged about 12 years,

**3.** Master Mohammed Abdur Rehaman, Aged about 9 years,

**4.** Kumari Suriya Fathima, Aged about 6 years,

No. 2 to 4 are childrens of late Mohammed Rafiq

(represented by Natural guardian

their mother 1st plaintiff herein),

All are residing at No. 630, 8th cross, Bandappa Street,

B.K. Nagar, Yeshvanthapura, Bangalore. **Plaintiff's**

**AND**

**NIL** **Defendants**

**PUBLIC NOTICE**

Notice is hereby given that a petition has been made to this Court Under Sec. 372 of the Indian Succession Act, for grant of Succession Certificate to the estate of the deceased Mohammed Rafiq., who died on 21-05-2010 at Bangalore.

Be it known that No Caveat has been entered and the said petition is posted for hearing on 25-08-2012 at 11'O clock. Any person's claiming to have any interest may come and participate in the proceeding before grant of Succession Certificate.

| Sl. No. | Name of the Bank | Description of the Bank Account No. | Balance amount remaining in the said A/c |
|---|---|---|---|
| 1 | State Bank of India | 31108099178 | Rs. 96,400/- (ninety six thousand only) with interest. |

Given under my hand and the seal of the Court this the 24th July 2012.

By Order of the Court,
Asst. Registrar,
City Civil Court Mayo Hall Unit, Bangalore

**P.D. 98**

## IN THE COURT OF THE CITY CIVIL JUDGE, MAYOHALL, BANGALORE

**P & S.C. No. 25032 of 10**

Dr. Anthony Sebastian,
S/o. late Mathew Sebastian, Aged about 65 years,
Presently at No. 65, II Floor, 8th B Main, Jakkasandra Block,
Koramangala, Bangalore-560 034 **… Petitioner**

**Vs**

**NIL** **… Respondent**

Notice is hereby given that a petition have been made to this Court Under Sec. 276 of the Indian Succession Act, for grant of probate of Will consisting of immovable property No. 87/1/21/2/40, in converted survey No. 21/2, vides ALN. SR. 1992/71-72, situated at Basavanapura Village, Bangalore, of the deceased late Smt. Chinnamma Sebastian who died on 27-12-2000.

Be it known that No Caveat has been entered and the said petition is posted for hearing on 28-09-2012 at 11-00 a.m. All persons claiming to have any interest in the assets of the deceased may come and see the proceedings before grant of probate of the Will.

Given under my hand seal of the Court this the 2nd August 2012.

By Order of the Court,
Asst. Registrar,
City Civil Court Mayo Hall Unit, Bangalore

**P.D. 99**

**IN THE COURT OF THE IV ADDITIONAL CITY CIVIL JUDGE, C.C.C.H. 21 MAYOHALL, BANGALORE**

**P & S.C. No. 25014 of 2012 (hearing date 27-8-2012)**

Mr. L. Kumarguru, Aged 44 years,
Advocate, S/o N. Dorairaj, No. 49, R.P. Road,
Rajabhavanan, Nehru Nagar, Bangalore-20 **… PETITIONER**

**Vs**

1. Mr. Nagabhushanam, Aged 64 years
S/o D. Loganathan, Residing at No. 14,
7th cross, Mahalakshmi Layout, Bangalore.

2. Mr. Mukesh Jain, aged 37 years,
S/o Dalichand Jain, Residing at No. 17, 9th Cross,
Kumara Park West, Bangalore-20.

3. Mr. D. Loganathan, Aged 68 years,
S/o. N. Dorai Raj, Residing at No. 49, R.P. Road,
Rajabhavanam, Nehru Nagar, Bangalore-20.

4. Mr. L. Sarvanan, Aged 44 years,
S/o D. Loganathan, Residing at No. 49,
R.P. Road, Rajabhavanan, Nehrunagar,
Bangalore-20 **… RESPONDENTS**

WHEREAS the Petitioner above named has made an application filed under Section 276 of the Indian Succession Act, for Grant of Probate of the Will dated 19-8-1980 in respect of the Schedule Property of Mrs. Saraswathi Bai, wife of late Dorairaj, who died on 8-9-1980.

Be it known that no caveate had been entered and that the above Petition is posted for hearing on 27-8-2012 and any person claiming to have any interest in the Estate of the Deceased may come and see the Proceedings before the grant of Probate.

**SCHEDULE PROPERTY**

All that piece and parcel of property bearing Old No. 30/1, New No. 49, 50, 51 & 52, situated at Railway Parallel Road, Nehru Nagar, Sheshadripuram Post, Bangalore-20, comprising of land with residential building having ground first, second and third floor known and called as 'RAJA BHAVANAN', Measuring : East to West : 55 feet ; North to South : 45 feet. Bounded on : East by : Railway Parallel Road ; West by : Private Property ; North by : No. 13, M.B. Guruappa's Property ; South by : No. 40, I. Nagappa's Property.

Given under my hand and seal on this 3rd day of August 2012.

By Order of the Court,
Asst. Registrar,
City Civil Court Mayo Hall Unit, Bangalore

**P.D. 100**

**FORM-IV**

**(SEE RULE-12)**

**NOTICE**

It is hereby notified that the undersigned has changed his name from **DYAMANNA YALLAPPA HARIJAN** to **DYAMANNA YALLAPPA JIGALUR.**

**P.D. C/n 105** **DYAMANNA YALLAPPA HARIJAN**

**FORM-IV**

**(SEE RULE-12)**

**NOTICE**

It is hereby noticed that the undersigned I have changed my name **ESHAPPA S/o SHEKHARAPPA KONAPPANAVAR** to **ESHAPPA S/o SHEKHARAPPA MATTUR.**

**P.D. C/n 104** **ESHAPPA S/o SHEKHARAPPA KONAPPANAVAR**

**ಕರ್ನಾಟಕ ಲೋಕಸೇವಾ ಆಯೋಗದ ಕಛೇರಿ, ಉದ್ಯೋಗ ಸೌಧ, ಬೆಂಗಳೂರು**

**ಸಂಖ್ಯೆ, ಇಪ(2)186/2012–13/ಪಿಎಸ್‌ಸಿ, ಬೆಂಗಳೂರು, ದಿನಾಂಕ: 25–06–2012.**

**ತಿದ್ದುಪಡಿ ಅಧಿಸೂಚನೆ**

2011ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ದಿನಾಂಕ:12–04–2012ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದ್ದು, ಸದರಿ ಫಲಿತಾಂಶದಲ್ಲಿ ಧಾರವಾಡ ಕೇಂದ್ರದ ಅಪೆಂಡಿಕ್ಸ್–'ಡಿ'ರಡಿ ತಡೆಹಿಡಿಯಲಾಗಿದ್ದ ನೋಂದಣಿ ಸಂಖ್ಯೆ 39210ರ ಅಭ್ಯರ್ಥಿಯ ಫಲಿತಾಂಶವನ್ನು ಪುನರ್ ವಿಮರ್ಶಿಸಲಾಗಿದ್ದು. ಪುನರ್ ವಿಮರ್ಶಿತ ಫಲಿತಾಂಶವನ್ನು ಸಂಬಂಧಿತ ಅಭ್ಯರ್ಥಿಯ ಮಾಹಿತಿಗಾಗಿ ಪ್ರಕಟಿಸಲಾಗಿದೆ.

**ಅಪೆಂಡಿಕ್ಸ್ " ಎ "**

**ಧಾರವಾಡ ಕೇಂದ್ರ**

ಕಮ್ಯುನಿಟಿಡೆವಲಪ್‌ಮೆಂಟ್ ಭಾಗ–1

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ. **39210ನ್ನು** ಸೇರಿಸಿ ಓದಿಕೊಳ್ಳುವುದು.

**ವಿ. ಬಿ. ಪಾಟೀಲ್**
ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ.

**ಪಿ.ಆರ್. 128**

**ಕರ್ನಾಟಕ ಲೋಕಸೇವಾ ಆಯೋಗದ ಕಛೇರಿ, ಉದ್ಯೋಗ ಸೌಧ, ಬೆಂಗಳೂರು**

**ಸಂಖ್ಯೆ, ಇಪ(2)187/2012–13/ಪಿಎಸ್‌ಸಿ, ಬೆಂಗಳೂರು, ದಿನಾಂಕ: 25–06–2012.**

**ತಿದ್ದುಪಡಿ ಅಧಿಸೂಚನೆ**

2011ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ದಿನಾಂಕ:12–04–2012ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದ್ದು, ಸದರಿ ಅಧಿವೇಶನದಲ್ಲಿ ಅಭ್ಯರ್ಥಿಗಳು ಗಳಿಸಿರುವ ಅಂಕಗಳು ಹಾಗೂ ಹಿಂದಿನ ಅಧಿವೇಶನದಲ್ಲಿ ಗಳಿಸಿರುವ ವಿನಾಯಿತಿ ಪ್ರಕರಣಗಳನ್ನು ನಿಯಮಾನುಸಾರ ಪರಿಗಣಿಸಿ ತತ್ಸಂಬಂಧ ಅರ್ಹ ಅಭ್ಯರ್ಥಿಗಳ ಫಲಿತಾಂಶವನ್ನು ತಿದ್ದುಪಡಿಯ ಮೂಲಕ ಸಂಬಂಧಿತರ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ.

**ಅಪೆಂಡಿಕ್ಸ್ " ಎ "**

**ಶಿವಮೊಗ್ಗ ಕೇಂದ್ರ**

**ಜನರಲ್ ಲಾ ಭಾಗ–1**

ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ. **56622ನ್ನು** ಸೇರಿಸಿ ಓದಿಕೊಳ್ಳುವುದು.

**ರೆವಿನ್ಯೂ ಲೋಯರ್**

ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ. **56622ನ್ನು** ಸೇರಿಸಿ ಓದಿಕೊಳ್ಳುವುದು.

**ವಿ. ಬಿ. ಪಾಟೀಲ್**
ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ.

**ಪಿ.ಆರ್. 129**